ರಷ್ಯನ್ ಜಾನಪದ ಕಥೆ



# ಅಕ್ಕ
# ಅಲ್ಯೋನುಷ್ಕ
# ಹಾಗೂ ತಮ್ಮ
# ಇವಾನುಷ್ಕ





ಒಂದಾನೊಂದು ಕಾಲದಲ್ಲಿ ಒಬ್ಬ ಮುದುಕ ಒಬ್ಬ ಮುದುಕಿ ವಾಸವಾಗಿದ್ದರು. ಅವರಿಗೆ ಇಬ್ಬರು ಮಕ್ಕಳು – ಮಗಳು ಅಲ್ಯೋನುಷ್ಕ ಹಾಗೂ ಪುಟ್ಟ ಮಗ ಇವಾನುಷ್ಕ. ಮುದುಕ, ಮುದುಕಿ ಸತ್ತುಹೋದರು. ಅಲ್ಯೋನುಷ್ಕ ಹಾಗೂ ಇವಾನುಷ್ಕ ಒಂಟಿಯಾಗಿ ಉಳಿದರು.

ಅಲ್ಯೋನುಷ್ಕ ಕೆಲಸ ಹುಡುಕಿಕೊಂಡು ಹೊರಟಳು. ತಮ್ಮನನ್ನೂ ಜೊತೆಯಲ್ಲಿ ಕರೆದುಕೊಂಡು ಹೋದಳು. ತುಂಬ ದೂರ ನಡೆದು ಹೋದರು. ಹೊಲಗದ್ದೆ ಎಲ್ಲ ದಾಟಿಕೊಂಡು ಹೋದರು. ಇವಾನುಷ್ಕನಿಗೆ ಬಾಯಾರಿಕೆ ಆಯಿತು:

"ಅಕ್ಕ ಅಲ್ಯೋನುಷ್ಕ, ನನಗೆ ಬಾಯಾರಿಕೆ."

"ಸ್ವಲ್ಪ ತಾಳು, ತಮ್ಮ. ಬಾವಿ ಸಿಕ್ಕೂವರೆಗೂ ತಾಳಿಕೊಂಡಿರು."

ಹೋದರೂ, ಹೋದರೂ. ಸೂರ್ಯ ನೆತ್ತಿ ಮೇಲಿದ್ದಾನೆ, ಬಾವಿ ದೂರದಲ್ಲಿದೆ, ಬಿಸಿಲು ಬೇಯಿಸುತ್ತಿದೆ, ಬೆವರು ಇಳಿಯುತ್ತಿದೆ. ಕೊನೆಗೆ ಅವರು ಒಂದು ಹಸುವಿನ ಗೊರಸಿನ ಆಕಾರದ ಕೊಳದ ಬಳಿಗೆ ಬಂದರು. ಅದರಲ್ಲಿ ನೀರು ತುಂಬಿತ್ತು.

"ಅಕ್ಕ ಅಲ್ಯೋನುಷ್ಕ, ಈ ಕೊಳದ ನೀರು ಕುಡಿಯಲಾ ?"

"ಬೇಡ, ತಮ್ಮ, ಬೇಡ. ಈ ನೀರು ಕುಡಿದರೆ ನೀನು ತಕ್ಷಣ ಕರು ಆಗಿ ಬಿಡ್ತೀಯ."

ತಮ್ಮ ಅಕ್ಕನ ಮಾತಿಗೆ ಒಪ್ಪಿದ. ಅವರು ಮುಂದೆ ಹೊರಟರು.

ಸೂರ್ಯ ನೆತ್ತಿ ಮೇಲಿದ್ದಾನೆ, ಬಾವಿ ದೂರದಲ್ಲಿದೆ, ಬಿಸಿಲು ಬೇಯಿಸುತ್ತಿದೆ, ಬೆವರು ಇಳಿಯುತ್ತಿದೆ.



ಸ್ವಲ್ಪ ದೂರ ಹೋದ ಮೇಲೆ ಅವರಿಗೆ ಒಂದು ಕುದುರೆ ಗೊರಸಿನ ಆಕಾರದ ಕೊಳ ಕಂಡುಬಂದಿತು. ಅದರ ತುಂಬ ನೀರಿತ್ತು.

"ಅಕ್ಕ ಅಲ್ಯೋನುಷ್ಕ, ಈ ಕೊಳದ ನೀರು ಕುಡಿಯಲಾ?"

"ಬೇಡ, ತಮ್ಮ, ಬೇಡ. ಈ ನೀರು ಕುಡಿದರೆ ನೀನು ತಕ್ಷಣ ಕುದುರೆ ಮರಿ ಆಗ್ತೀಯ."

ಇವಾನುಷ್ಕ ನಿಟ್ಟುಸಿರು ಬಿಟ್ಟ. ಅವರು ಮತ್ತೆ ಮುಂದೆ ನಡೆದರು.

ಹೋಗ್ತಾರೆ, ಹೋಗ್ತಾರೆ. ಸೂರ್ಯ ನೆತ್ತಿ ಮೇಲಿದ್ದಾನೆ, ಬಾವಿ ದೂರದಲ್ಲಿದೆ. ಬಿಸಿಲು ಬೇಯಿಸುತ್ತಿದೆ, ಬೆವರು ಇಳಿಯುತ್ತಿದೆ. ಕೊನೆಗೆ ಅವರಿಗೆ ಮೇಕೆ ಗೊರಸಿನ ಆಕಾರದ ಒಂದು ಕೊಳ ಸಿಕ್ಕುತ್ತೆ. ಅದರ ತುಂಬ ನೀರು.

ಇವಾನುಷ್ಕ ಹೇಳ್ತಾನೆ:

"ಅಕ್ಕ ಅಲ್ಯೋನುಷ್ಕ, ನನ್ನ ಬಾಯೆಲ್ಲ ಒಣಗಿಹೋಗಿದೆ. ನಾನು ಈ ಕೊಳದ ನೀರು ಕುಡೀತೀನಿ."

"ಬೇಡ, ತಮ್ಮ, ಬೇಡ. ಈ ನೀರು ಕುಡಿದರೆ ನೀನು ಮೇಕೆ ಮರಿ ಆಗ್ತೀಯ."

ಆದರೆ ಈ ಸಾರಿ ಇವಾನುಷ್ಕ ಅಕ್ಕನ ಮಾತು ಕೇಳಲಿಲ್ಲ. ಮೇಕೆ ಗೊರಸಿನ ಆಕಾರದ ಆ ಕೊಳದ ನೀರು ಕುಡಿದ.

ಕುಡಿದನೋ ಇಲ್ಲವೋ ತಕ್ಷಣವೇ ಮೇಕೆ ಮರಿಯಾದ.

ಅಲ್ಯೋನುಷ್ಕ ತಮ್ಮನನ್ನು ಕೂಗಿ ಕರೀತಾಳೆ. ತಮ್ಮನ ಬದಲು ಒಂದು ಪುಟ್ಟ ಬಿಳಿಯ ಮೇಕೆ ಮರಿ ಓಡಿ ಬರುತ್ತೆ.

ಅಲ್ಯೋನುಷ್ಕಳಿಗೆ ಕಣ್ಣೀರು ಉಕ್ಕಿ ಬಂತು. ಹುಲ್ಲಿನ ಮೆದೆಯ ನೆರಳಿನಲ್ಲಿ ಕುಳಿತು ಬಿಕ್ಕಿ ಬಿಕ್ಕಿ ಅಳ ತೊಡಗಿದಳು. ಮೇಕೆ ಮರಿ ಅವಳ ಸುತ್ತವೇ ಜಿಗಿದಾಡುತ್ತಿತ್ತು.





ಆಗ ಅಕಸ್ಮಾತ್ತಾಗಿ ಅವರ ಬಳಿಗೆ ಒಬ್ಬ ವರ್ತಕ ಬಂದ.

"ಯಾಕೆ ಅಳುತಿದೀಯ, ಚೆಲುವೆ?"

ಅಲ್ಯೋನುಷ್ಕ ಅವನಿಗೆ ತನ್ನ ದುರದೃಷ್ಟ ಹೇಳಿಕೊಂಡಳು.

ವರ್ತಕ ಅವಳಿಗೆ ಹೇಳ್ತಾನೆ:

"ನನ್ನನ್ನು ಮದುವೆಯಾಗು. ನಿನ್ನನ್ನು ಸುಖವಾಗಿ ಇರಿಸ್ತೀನಿ. ನಿನ್ನ ಮೈ ಮೇಲೆ ಚಿನ್ನ ಬೆಳ್ಳಿ ಹಾಕ್ತೀನಿ. ಮೇಕೆ ಮರಿಯೂ ನಮ್ಮ ಜೊತೆಯೇ ವಾಸಮಾಡಿಕೊಂಡಿರುತ್ತೆ."

ಅಲ್ಯೋನುಷ್ಕ ಯೋಚನೆ ಮಾಡಿದಳು. ಕೊನೆಗೆ ವರ್ತಕನನ್ನು ಮದುವೆಯಾಗಲು ಒಪ್ಪಿದಳು.

ಅವರು ಸುಖವಾಗಿ ವಾಸಮಾಡ ತೊಡಗಿದರು. ಮೇಕೆ ಮರಿಯೂ ಅವರ ಜೊತೆಯೇ ವಾಸ ಮಾಡುತ್ತಿತ್ತು. ಅಲ್ಯೋನುಷ್ಕಳ ತಟ್ಟೆಯಿಂದಲೇ ಊಟ ತಿನ್ನುತ್ತಿತ್ತು.

ಒಮ್ಮೆ ವರ್ತಕ ಕೆಲಸದ ಮೇಲೆ ಎಲ್ಲೋ ಹೋದ. ಆಗ ಎಲ್ಲಿಂದಲೋ ಒಬ್ಬ ಮಾಟಗಾತಿ ಬಂದಳು. ಅವಳು ಅಲ್ಯೋನುಷ್ಕಳ ಕಿಟಕಿಯ ಬಳಿ ನಿಂತು ಸ್ನಾನ ಮಾಡಲು ನದಿಗೆ ಬರುವಂತೆ ಆ ಹುಡುಗಿಯನ್ನು ತುಂಬ ವಾತ್ಸಲ್ಯದಿಂದ, ಪ್ರೀತಿಯಿಂದ ಪುಸಲಾಯಿಸುತ್ತ ಕರೆಯ ತೊಡಗಿದಳು.

ಅಲ್ಯೋನುಷ್ಕ ಮಾಟಗಾತಿಯ ಮಾತಿಗೆ ಮರುಳಾಗಿ ಅವಳನ್ನು ಹಿಂಬಾಲಿಸಿಕೊಂಡು ನದಿಗೆ ಹೋದಳು. ನದಿ ತಲುಪಿದ ಕೂಡಲೇ ಮಾಟಗಾತಿ ಅವಳ ಮೇಲೆ ಬಿದ್ದು ಅವಳನ್ನು ಬೀಳಿಸಿ, ಅವಳ ಕತ್ತಿಗೆ ಒಂದು ದೊಡ್ಡ ಕಲ್ಲುಗುಂಡು ಕಟ್ಟಿ, ಅವಳನ್ನು ನದಿಯೊಳಕ್ಕೆ ಬಿಸಾಡಿದಳು.

ಆಮೇಲೆ ತಾನೇ ಅಲ್ಯೋನುಷ್ಕಳಂತೆ ರೂಪ ಬದಲಿಸಿಕೊಂಡು ಅವಳ ಉಡುಪುಗಳಿಂದಲೇ ತನ್ನನ್ನು ಅಲಂಕರಿಸಿಕೊಂಡು ವರ್ತಕನ ಮನೆಗೆ ಹೋದಳು. ಅವಳು ಮಾಟಗಾತಿಯಾಗಿದ್ದಳು ಅನ್ನೋದು ಯಾರಿಗೂ ತಿಳಿಯಲಿಲ್ಲ. ವರ್ತಕ ಹಿಂದಿರುಗಿದ. ಅವನಿಗೂ ಗೊತ್ತಾಗಲಿಲ್ಲ.

ಮೇಕೆ ಮರಿಗಷ್ಟೆ ಎಲ್ಲ ತಿಳಿಯಿತು. ಅದು ಜೋಲು ಮುಖ ಹಾಕಿಕೊಂಡು ಅಡ್ಡಾಡುತ್ತಿತ್ತು. ತಿನ್ನಲಿಲ್ಲ, ಕುಡೀಲಿಲ್ಲ. ಬೆಳಿಗ್ಗೆ, ಸಂಜೆ ನದಿಯ ತೀರದ ಬಳಿಗೆ ಹೋಗಿ ಅರಚುತ್ತಿತ್ತು:

"ಅಲ್ಯೋನುಷ್ಕ, ನನ್ನ ಪ್ರೀತಿಯ ಅಕ್ಕ !
ಈಜಿ ಬಾ, ತೀರಕ್ಕೆ, ಈಜಿ ಬಾ...

ಇದನ್ನು ಕಂಡುಕೊಂಡ ಮಾಟಗಾತಿ ಮೇಕೆ ಮರಿಯನ್ನು ಕೊಲ್ಲುವಂತೆ ಗಂಡನನ್ನು ಪೀಡಿಸ ತೊಡಗಿದಳು.





ವರ್ತಕನಿಗೆ ಮೇಕೆ ಮರಿಯನ್ನು ಕಂಡರೆ ತುಂಬ ಇಷ್ಟ. ಅವನು ಅದಕ್ಕೆ ಹೊಂದಿಕೊಂಡು ಬಿಟ್ಟಿದ್ದ. ಅದರ ಬಗೆಗೆ ಅವನಿಗೆ ಕನಿಕರವಾಯಿತು. ಆದರೆ ಮಾಟಗಾತಿ ಬಿಡಲಿಲ್ಲ. ಅವಳು ಒಂದೇ ಸಮನೆ ಅದನ್ನು ಕೊಲ್ಲುವಂತೆ ಅವನನ್ನು ಎಷ್ಟು ಪೀಡಿಸ ತೊಡಗಿದಳು, ಎಷ್ಟು ಕಾಡಿಸ ತೊಡಗಿದಳು ಅಂದರೆ, ವರ್ತಕ ಕೊನೆಗೆ ವಿಧಿ ಇಲ್ಲದೆ ಒಪ್ಪಿಕೊಳ್ಳಲೇ ಬೇಕಾಯಿತು:

"ಸರಿ, ಕೊಂದು ಹಾಕು."

ಮಾಟಗಾತಿ ದೊಡ್ಡ ಬೆಂಕಿ ಹಚ್ಚುವಂತೆ, ದೊಡ್ಡ ಕೊಳಗದಲ್ಲಿ ನೀರು ಕಾಯಿಸುವಂತೆ, ದೊಡ್ಡ ಚಾಕು ಚೂಪು ಮಾಡುವಂತೆ ಆಳಿಗೆ ಆಜ್ಞಾಪಿಸಿದಳು.

ತಾನು ಇನ್ನು ಹೆಚ್ಚು ಕಾಲ ಬದುಕಿರುವುದಿಲ್ಲವೆಂಬುದು ಮೇಕೆ ಮರಿಗೆ ತಿಳಿಯಿತು. ಅದು ತನ್ನ ಸಾಕು ತಂದೆಗೆ ಹೇಳುತ್ತೆ:

"ಸಾಯೋಕೆ ಮುಂಚೆ ಸ್ವಲ್ಪ ನದೀಗೆ ಹೋಗಿ ನೀರು ಕುಡಿದು ಬರಲು ಬಿಡ್ತೀಯ?"

"ಸರಿ, ಹೋಗು."

ಮೇಕೆ ಮರಿ ನದಿಯ ಬಳಿಗೆ ಓಡಿತು. ತೀರದಲ್ಲಿ ನಿಂತು ಮನಕರಗುವಂತೆ ಗೋಳು ಕರೆಯ ತೊಡಗಿತು:





"ಅಲ್ಯೋನುಷ್ಕ, ನನ್ನ ಪ್ರೀತಿಯ ಅಕ್ಕ !
ಈಜಿ ಬಾ, ತೀರಕ್ಕೆ, ಈಜಿ ಬಾ.
ಉರಿಯುತಿದೆ ಧಗಧಗಿಸಿ ಬೆಂಕಿ,
ಕುದಿಯುತಿದೆ ಕೊಳಗದಲಿ ನೀರು,
ಟಣಟಣಗುಟ್ಟುತಿವೆ ಚಾಕುಗಳು.
ಕೊಲ್ಲುತಿಹರವರಿಂದು ನನ್ನನ್ನು."

ಅಲ್ಯೋನುಷ್ಕ ನದಿಯ ತಳದಿಂದಲೇ ಅವನಿಗೆ ಉತ್ತರಿಸುತ್ತಾಳೆ:

"ಓಹ್, ನನ್ನ ಪ್ರೀತಿಯ ತಮ್ಮ ಇವಾನುಷ್ಕ !
ಎಳೆಯುತಿದೆ ತಳಕೆನ್ನ ಕಲ್ಲುಗುಂಡು,
ತೊಡರುತಿದೆ ಕಾಲಿಗೆ ರೇಷ್ಮೆ ಹುಲ್ಲು,
ಅವುಕುತಿದೆ ಎದೆಯ ಹಳದಿ ಮರಳು."

ಈ ಮಧ್ಯೆ ಮಾಟಗಾತಿ ಮೇಕೆ ಮರಿಗಾಗಿ ಹುಡುಕಾಡಿದಳು. ಅವಳಿಗೆ ಅದು ಎಲ್ಲೂ ಕಂಡುಬರಲಿಲ್ಲ. ತಕ್ಷಣವೇ ಆಳನ್ನು ಅಟ್ಟಿದಳು:

"ಹೋಗು, ಮೇಕೆ ಮರಿಯನ್ನು ಹುಡುಕಿ ತಾ. ಅದನ್ನು ನನ್ನ ಬಳಿಗೆ ಎಳೆದು ತಾ."

ಆಳು ನದಿಯ ಬಳಿಗೆ ಹೋದ. ನೋಡುತ್ತಾನೆ – ತೀರದಲ್ಲಿ ಮೇಕೆ ಮರಿ ಓಡಾಡುತ್ತಿದೆ, ಮನಕರಗುವಂತೆ ಅರಚುತ್ತಿದೆ:

"ಅಲ್ಯೋನುಷ್ಕ, ನನ್ನ ಪ್ರೀತಿಯ ಅಕ್ಕ !
ಈಜಿ ಬಾ, ತೀರಕ್ಕೆ, ಈಜಿ ಬಾ.
ಉರಿಯುತಿದೆ ಧಗಧಗಿಸಿ ಬೆಂಕಿ,
ಕುದಿಯುತಿದೆ ಕೊಳಗದಲಿ ನೀರು,
ಟಣಟಣಗುಟ್ಟುತಿವೆ ಚಾಕುಗಳು.
ಕೊಲ್ಲುತಿಹರವರಿಂದು ನನ್ನನ್ನು."

ನದಿಯಿಂದ ಅದಕ್ಕೆ ಉತ್ತರ ಬರುತ್ತೆ:

"ಓಹ್, ನನ್ನ ಪ್ರೀತಿಯ ತಮ್ಮ ಇವಾನುಷ್ಕ!
ಎಳೆಯುತಿದೆ ತಳಕೆನ್ನ ಕಲ್ಲುಗುಂಡು,
ತೊಡರುತಿದೆ ಕಾಲಿಗೆ ರೇಷ್ಮೆ ಹುಲ್ಲು,
ಅವುಕುತಿದೆ ಎದೆಯ ಹಳದಿ ಮರಳು."

ಆಳು ಮನೆಗೆ ಓಡಿ ಹೋಗಿ ನದಿಯ ಬಳಿ ತಾನು ಏನು ಕೇಳಿದನೋ ಅದನ್ನು ವರ್ತಕನಿಗೆ ತಿಳಿಸಿದ. ಜನ ನೆರೆದರು. ನದಿಯ ಬಳಿಗೆ ಹೋದರು. ರೇಷ್ಮೆ ಬಲೆಗಳನ್ನು ನೀರಿನೊಳಕ್ಕೆ ಹಾಕಿ ಅಲ್ಯೋನುಷ್ಕಳನ್ನು ತೀರದ ಮೇಲಕ್ಕೆ ಎತ್ತಿ ತಂದರು. ಅವಳ ಕೊರಳಿಗೆ ಕಟ್ಟಿದ್ದ ಕಲ್ಲುಗುಂಡನ್ನು ಕಿತ್ತು ಹಾಕಿದರು, ಶುಭ್ರವಾದ ನೀರಿನಲ್ಲಿ ಅವಳ ಮೈ ತೊಳೆದರು, ಸುಂದರವಾದ ಉಡುಪು ತೊಡಿಸಿದರು. ಅಲ್ಯೋನುಷ್ಕ ಮತ್ತೆ ಜೀವ ತಳೆದಳು, ಹಿಂದಿಗಿಂತ ಹೆಚ್ಚು ಸುಂದರವಾಗಿ ಕಂಗೊಳಿಸ ತೊಡಗಿದಳು.

ಮೇಕೆ ಮರಿಗೂ ಅಮಿತಾನಂದವಾಯಿತು. ಅದು ಮೂರು ಬಾರಿ ಜಿಗಿದು ಉರುಳು ಹಾಕಿತು. ತಕ್ಷಣವೇ ಬಾಲಕ ಇವಾನುಷ್ಕನಾಗಿ ಬದಲಿತು.

ಕುತಂತ್ರಿ ಮಾಟಗಾತಿಯನ್ನು ಕುದುರೆಯ ಬಾಲಕ್ಕೆ ಕಟ್ಟಲಾಯಿತು. ಕುದುರೆಯನ್ನು ಬಯಲಿನಲ್ಲಿ ಓಡಿಸಲಾಯಿತು.



ಚಿತ್ರಗಳು: ತತ್ಯಾನ ಷೆವರ್ಯೋವ
ಅನುವಾದ: ವಿಮಲಾ ರಾವ್

СЕСТРИЦА АЛЕНУШКА И БРАТЕЦ ИВАНУШКА

Русская народная сказка

*на языке каннада*

SISTER ALYONUSHKA AND BROTHER IVANUSHKA

**A Russian folk tale**

*in Kannada*



ರಾದುಗ ಪ್ರಕಾಶನ
ಮಾಸ್ಕೋ



ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ.ಲಿ.
ಬೆಂಗಳೂರು



ಸೋವಿಯತ್ ಒಕ್ಕೂಟದಲ್ಲಿ ಮುದ್ರಿತವಾದುದು

ISBN 5-05-002156-1